## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2054
2. ಸದಸ್ಯರ ಹೆಸರು : ಶ್ರೀ ವೈ.ಎಂ. ಸತೀಶ್
3. ಉತ್ತರಿಸಬೇಕಾದ ದಿನಾಂಕ : 17.03.2022
4. ಉತ್ತರಿಸುವ ಸಚಿವರು : ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ವಿಜಯನಗರ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ 2ನೇ ಹಂತದ ಏತ ನೀರಾವರಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಸರ್ಕಾರದ ಮುಂದೆ ಪ್ರಸ್ತಾವನೆಗಳು ಬಂದಿವೆಯೇ; ಬಂದಿದ್ದಲ್ಲಿ, ಈ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರದ ನಿಲುವೇನು; (ಮಾಹಿತಿ ನೀಡುವುದು) | ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ 2ನೇ ಹಂತದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ರೂ.2450.00 ಲಕ್ಷ ಅಂದಾಜು ವೆಚ್ಚದಲ್ಲಿ ಕೈಗೊಳಲು ಪ್ರಸ್ತಾವನೆ ಸ್ವೀಕೃತವಾಗಿದ್ದು, ಅನುದಾನದ ಲಭ್ಯತೆ ಅನುಸಾರ ಸದರಿ ಕಾಮಗಾರಿಯನ್ನು ಕೈಗೊಳ್ಳಲು ಪರಿಶೀಲಿಸಲಾಗುವುದು. |
| ಆ | ಈ ಯೋಜನೆಯನ್ನು ಜಾರಿಗೊಳಿಸಿದ್ದಲ್ಲಿ, ಇದರಿಂದ ಎಷ್ಟು ಭೂ ಪ್ರದೇಶಕ್ಕೆ ಅನುಕೂಲವಾಗುವುದು? (ಮಾಹಿತಿ ನೀಡುವುದು) | ಈ ಯೋಜನೆ ಯಡಿ ಸುಮಾರು 1400 ಎಕರೆ ನೀರಾವರಿ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಬಹುದಾಗಿರುತ್ತದೆ. |

ಸಂಖ್ಯೆ: MID 60 LCQ 2022

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ
ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.

# ಪೂರಕ ಟಿಪ್ಪಣಿ

ಬಳ್ಳಾರಿ ಜಿಲ್ಲೆ (ಪ್ರಸ್ತುತ ವಿಜಯನಗರ ಜಿಲ್ಲೆ) ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ ಏತ ನೀರಾವರಿ ಯೋಜನೆಯನ್ನು ತುಂಗಾಭದ್ರ ಜಲಾಯದ ಹಿನ್ನೀರಿನ ಬಲದಂಡೆ ಭಾಗದಲ್ಲಿ 1976 ರಲ್ಲಿ ನಿರ್ಮಿಸಲಾಗಿರುತ್ತದೆ. ಈ ಯೋಜನೆಯಿಂದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿ, ಶಿಗೇನಹಳ್ಳಿ, ಬನ್ನಿಗೋಳ, ಚಿಲಗೋಡು, ಕೃಷ್ಣಾಪುರ ಗ್ರಾಮಗಳ 3000 ಎಕರೆ ಕೃಷಿ ಜಮೀನುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಗುರಿ ಹೊಂದಲಾಗಿರುತ್ತದೆ.

ಸದರಿ ಏತ ನೀರಾವರಿ ಯೋಜನೆಯ ಅಚ್ಚುಕಟ್ಟು ಪ್ರದೇಶದಲ್ಲಿ ಕೆಲವೊಂದು ಕಡೆ ಅಂದರೆ ತಂಬ್ರಹಳ್ಳಿ, ಕೃಷ್ಣಾಪುರ ಹಾಗೂ ಶಿಗೇನಹಳ್ಳಿ ಗ್ರಾಮಗಳಲ್ಲಿ ವಸಾಹತುಗಳನ್ನು (ಕಾಲೋನಿಗಳನ್ನು) ಗ್ರಾಮಗಳ ಪಕ್ಕದಲ್ಲಿರುವ ಅಚ್ಚುಕಟ್ಟಿನಲ್ಲಿ ನಿರ್ಮಿಸಿರುತ್ತಾರೆ. ತಂಬ್ರಹಳ್ಳಿ ಗ್ರಾಮದ ಪಕ್ಕದಲ್ಲಿ ಯೋಜನೆಯ ಅಚ್ಚುಕಟ್ಟು ಪ್ರದೇಶದಲ್ಲಿಯೇ ಎ.ಪಿ.ಎಂ.ಸಿ. ಯಾರ್ಡ್ ನಿರ್ಮಿಸಲಾಗಿರುತ್ತದೆ. ಕಾರಣ, ಯೋಜನೆಗೆ ನಿಗದಿ ಪಡಿಸಿದಂತೆ 3000 ಎಕರೆ ಬದಲಾಗಿ ಕೇವಲ 1600 ಎಕರೆ ಜಮೀನುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲಾಗುತ್ತಿದೆ.

ಸ್ಥಳೀಯ ರೈತರು, ಜನಪ್ರತಿನಿಧಿಗಳು, ಈ ಯೋಜನೆಯಿಂದ ಉಳಿತಾಯವಾಗುವ 1400 ಎಕರೆ ಅಚ್ಚುಕಟ್ಟು ಪ್ರದೇಶಕ್ಕೆ ಬದಲಾಗಿ ತಂಬ್ರಹಳ್ಳಿ ಗ್ರಾಮದ ಮೇಲ್ಭಾಗದಲ್ಲಿ ಬರುವ ತಂಬ್ರಹಳ್ಳಿ, ಕೃಷ್ಣಾಪುರ ಹಾಗೂ ಶಿಗೇನಹಳ್ಳಿ ಗ್ರಾಮಗಳ ಜಮೀನುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ತಂಬ್ರಹಳ್ಳಿ 2ನೇ ಹಂತದ ಏತ ನೀರಾವರಿ ಯೋಜನೆಯನ್ನು ಕೈಗೊಳ್ಳಲು ಬೇಡಿಕೆ ಇಟ್ಟಿರುತ್ತಾರೆ.

ಅದರಂತೆ, ತಂಬ್ರಹಳ್ಳಿ 2ನೇ ಹಂತದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ರೂ.2450.00 ಲಕ್ಷ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಅನುಮೋದನೆ ಕೋರಿ ರೇಖಾ ಅಂದಾಜನ್ನು ಕೇಂದ್ರ ಕಚೇರಿ ಕಛೇರಿ ಪತ್ರ ಸಂಖ್ಯೆ: 3118, ದಿನಾಂಕ: 11.08.2020 ರನ್ವಯ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ.

ಸರ್ಕಾರದ ಪತ್ರ ಸಂಖ್ಯೆ: ಸನೀಇ/108/ಏ.ನೀ.ಯೋ/2021/ಬೆಂಗಳೂರು ದಿನಾಂಕ:02.11.2021 ರನ್ವಯ "ಈಗಾಗಲೇ ಸಣ್ಣ ನೀರಾವರಿ ಇಲಾಖೆಯಡಿ ಇರುವ ಅಧಿಕ ಕಾರ್ಯಭಾರ ಹಾಗೂ ಪ್ರಸಕ್ತ ಆರ್ಥಿಕ ಪರಿಸ್ಥಿತಿಯಲ್ಲಿ ಚಾಲ್ತಿಯಲ್ಲಿರುವ/ಮುಂದುವರೆದ ಕಾಮಗಾರಿಗಳಿಗೆ ಆಧ್ಯತೆಯ ಮೇಲೆ ಅನುದಾನ ಒದಗಿಸಬೇಕಾಗಿರುವುದರಿಂದ ಹೊಸ ಕಾಮಗಾರಿಗಳಿಗೆ ಅನುದಾನ ಒದಗಿಸುವುದು ಕಷ್ಟಸಾಧ್ಯ ಆದ್ದರಿಂದ ಪ್ರಸ್ತಾವನೆಯನ್ನು ಸಧ್ಯಕ್ಕೆ ಮುಂದೂಡುವಂತೆ ಆಡಳಿತ ಇಲಾಖೆಗೆ ತಿಳಿಸಿದೆ" ಎಂಬ ಆರ್ಥಿಕ ಇಲಾಖೆಯ ಅಭಿಪ್ರಾಯದನುಸಾರ ಅಗತ್ಯ ಕ್ರಮ ಕೈಗೊಳ್ಳುವಂತೆ ತಿಳಿಸಲಾಗಿರುತ್ತದೆ.